ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

ಹೇಮಾವತಿ ನದಿಯಿಂದ ಮಾಗಡಿ ತಾಲ್ಲೂಕಿಗೆ ನೀರನ್ನು ಹರಿಸುವ ಬಗ್ಗೆ

ಶ್ರೀ ಅ. ದೇವೇಗೌಡ (ಪದವೀಧರರ ಕ್ಷೇತ್ರ) :-

717 (668) ಮಾನ್ಯ ಭಾರಿ ಮತ್ತು ಮಧ್ಯಮ ನೀರಾವರಿ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಮನಗರ ಜಿಲ್ಲೆಯ ಮಾಗಡಿ ತಾಲ್ಲೂಕಿಗೆ ಹೇಮಾವತಿ ನದಿಯಿಂದ ನಾಲೆಯ ಮೂಲಕ ಕುಡಿಯುವ ನೀರನ್ನು ಹರಿಸುವ ಕಾಮಗಾರಿಯು ಪ್ರಸ್ತುತ ಯಾವ ಹಂತದಲ್ಲಿದೆÀ ;

(ಆ) 2014 ರಲ್ಲಿ ಪ್ರಾರಂಭವಾದ ಈ ಕಾಮಗಾರಿಯು ವಿಳಂಬವಾಗುತ್ತಿದ್ದು, ಕಾಮಗಾರಿಯು ತ್ವರಿತವಾಗಿ ಪೂರ್ಣಗೊಳ್ಳಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು ;

(ಇ) ಮಾಗಡಿ ತಾಲ್ಲೂಕಿನ ಜನತೆಗೆ ಕುಡಿಯುವ ನೀರಿನ ಬವಣೆ ಹೆಚ್ಚಾಗಿದ್ದು, ಹೇಮಾವತಿ ನದಿಯಿಂದ ನಾಲೆಯ ಮೂಲಕ ಹರಿಸುವ, ಕುಡಿಯುವ ನೀರು ಕಾಮಗಾರಿಯು 2020ರೊಳಗಾಗಿ ಪೂರ್ಣಗೊಳ್ಳುವ ನಿರೀಕ್ಷೆ ಇದೆಯೇ ?